ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಬುಧವಾರ, ದಿನಾಂಕ: 09ನೇ ಡಿಸೆಂಬರ್, 2020

ಬೆಂಗಳೂರು ನಗರ ಜಿಲ್ಲೆಯ ವ್ಯಾಪ್ತಿಯಲ್ಲಿ ಅನಧಿಕೃತ ವಸತಿ (Layout)ಗಳ ನಿರ್ಮಾಣದ ಕುರಿತು

ಶ್ರೀ ಪಿ.ಆರ್.ರಮೇಶ್ (ನಾಮನಿರ್ದೇಶನ ಹೊಂದಿದವರು) :-

220 (252) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಬೆಂಗಳೂರು ನಗರದ ಜಿಲ್ಲೆ ವ್ಯಾಪ್ತಿಯಲ್ಲಿ ಕಂದಾಯ ಕೃಷಿ ಭೂಮಿಗಳಲ್ಲಿ ಅನಧಿಕೃತ ವಸತಿ ಸಮುಚ್ಛಯಗಳು/ಬಡಾವಣೆಗಳು (Layout) ತಲೆ ಎತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮವೇನು; (ಗ್ರಾಮವಾರು ಸಂಪೂರ್ಣ ವಿವರ ನೀಡುವುದು)

(ಆ) ಭೂ ಪರಿವರ್ತನೆಯಾಗದಿರುವ ಸದರಿ ಜಮೀನುಗಳಲ್ಲಿ ಮನೆಗಳನ್ನು (ಬಡಾವಣೆಗಳನ್ನು) ಅನಧಿಕೃತವಾಗಿ ನಿರ್ಮಾಣ ಮಾಡಿಕೊಂಡಿರುವವರ ವಿರುದ್ಧ ಮತ್ತು ಸಹಕರಿಸಿದ ಮತ್ತು ತಡೆಯಲು ವಿಫಲರಾದ ಅಧಿಕಾರಿಗಳ ವಿರುದ್ಧ ಸರ್ಕಾರ ಕ್ರಮ ಕೈಗೊಂಡಿದೆಯೇ; (ವಿವರ ನೀಡುವುದು)

(ಇ) ಸದರಿ ಬಡಾವಣೆಗಳಿಗೆ ಮೂಲಭೂತ ಸೌಕರ್ಯ ಕಲ್ಪಿಸದೇ ಇರುವುದರಿಂದ ಭವಿಷ್ಯದಲ್ಲಿ ಕೊಳಗೇರಿಗಳಾಗಿ ಪರಿವರ್ತನೆಗೊಳ್ಳುವ ಸಂಭವವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ? (ವಿವರ ನೀಡುವುದು)